# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : 134 (796) |
| 2 | ಸದಸ್ಯರ ಹೆಸರು | : ಶ್ರೀ.ಬಸವರಾಜ ಪಾಟೀಲ್ ಇಟಗಿ |
| 3 | ಉತ್ತರಿಸಬೇಕಾದ ದಿನಾಂಕ | : 09-03-2021 |
| 4 | ಉತ್ತರಿಸುವ ಸಚಿವರು | : ಮಾನ್ಯ ನಗರಾಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ) | ರಾಯಚೂರು ನಗರ ವ್ಯಾಪ್ತಿಯಲ್ಲಿ ದಿನದ 24 ಗಂಟೆ ಕುಡಿಯುವ ನೀರು ಯೋಜನೆ ಪೂರೈಕೆಗೆ ಸರ್ಕಾರ ಕೈಗೊಂಡ ಕ್ರಮವೇನು? | ಏಷ್ಯಿಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ಉತ್ತರ ಕರ್ನಾಟಕ ನಗರ ವಲಯ ಬಂಡವಾಳ ಹೂಡಿಕಾ ಕಾರ್ಯಕ್ರಮದಡಿಯಲ್ಲಿ (ಎನ್.ಕೆ.ಯು.ಎಸ್.ಐ.ಪಿ) ರಾಯಚೂರು 24X7 ಕುಡಿಯುವ ನೀರಿನ ಯೋಜನೆಯ ಕಾಮಗಾರಿಗೆ ದಿನಾಂಕ 28/02/2015 ರಂದು ರೂ.117.96 ಕೋಟಿಗಳ ವೆಚ್ಚದಲ್ಲಿ (ನಿರ್ಮಾಣ ವೆಚ್ಚ ರೂ.79.93 ಕೋಟಿ, ಕಾರ್ಯಾಚರಣೆ ಮತ್ತು ನಿರ್ವಹಣೆ ವೆಚ್ಚ ರೂ.38.02 ಕೋಟಿಗಳು) ಗುತ್ತಿಗೆ ನೀಡಲಾಗಿದೆ.<br><br>ಕರಾರಿನ ಪ್ರಕಾರ ನಿರ್ಮಾಣ ಕಾಮಗಾರಿಯನ್ನು ಪೂರ್ಣಗೊಳಿಸಲು ಗುತ್ತಿಗೆ ಅವಧಿ 30 ತಿಂಗಳು ನಿಗದಿಪಡಿಸಲಾಗಿದೆ. ವ್ಯವಸ್ಥೆ ಪ್ರಯೋಗಿಕವಾಗಿ ಚಾಲನೆ ನಡೆಸಲು 3 ತಿಂಗಳ ಕಾಲಾವಧಿ ಹಾಗೂ ಕಾರ್ಯಾಚರಣೆ ಮತ್ತು ನಿರ್ವಹಣೆ (Operation & Maintenance) ಗಾಗಿ ಸಿವಿಲ್ ಕಾಮಗಾರಿ ಮುಕ್ತಾಯದ ನಂತರ 60 ತಿಂಗಳು ನಿಗದಿಪಡಿಸಲಾಗಿದೆ.<br><br>ಕಾಮಗಾರಿಯ ಅಂಶ ಹಾಗೂ ಭೌತಿಕ ಪ್ರಗತಿ ವಿವರಗಳು ಈ ಕೆಳಗಿನಂತಿದೆ: |

| ಕಾಮಗಾರಿಯ ವಿವರ | ಕರಾರಿನ ಪ್ರಕಾರ | ಪರಿಷ್ಕೃತ ಪರಿಮಾಣ | ಪ್ರಗತಿ |
|---|---|---|---|
| ವಿತರಣಾ ಜಾಲದ ಉದ್ದ (ಹೆಚ್‌ಡಿಪಿಇ) (ಕಿ.ಮೀ) | 544.00 | 521.04 | 460 |
| ಕಚ್ಚಾ ನೀರಿನ 800 ಮಿ.ಮಿ (ಡಿಐ) ಏರು ಕೊಳವೆ ಮಾರ್ಗ (ಕಿ.ಮೀ) | 4.46 | 4.46 | 4.46 |
| ಶುದ್ಧ ನೀರಿನ 800 ಮಿ.ಮಿ (ಡಿಐ) ಏರು ಕೊಳವೆ ಮಾರ್ಗ (ಕಿ.ಮೀ) | 11.15 | 11.15 | 11.15 |
| ಮನೆ ಸಂಪರ್ಕ (ಸಂಖ್ಯೆ) | 37117 | 37117 | 32500 |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| | | ಗುತ್ತಿಗೆದಾರರು ನಿಗದಿತ ಅವಧಿಯಲ್ಲಿ ಕಾಮಗಾರಿಯನ್ನು ಪೂರ್ಣಗೊಳಿಸದ ಕಾರಣ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ:<br><br>• ಬಾಕಿ ಕಾಮಗಾರಿಯನ್ನು ವಿಸ್ತರಣಾ ಅವಧಿಯಲ್ಲಿ ಪೂರ್ಣಗೊಳಿಸಲು ನಿಯಮಿತವಾಗಿ ಪ್ರಗತಿ ಪರಿಶೀಲನೆ ನಡೆಸಲಾಗುತ್ತಿದೆ. ಕಾಮಗಾರಿಗಳ ಪ್ರಗತಿಯ ವಿವರವನ್ನು ದಿನವಹಿ ಪಡೆದು ಯೋಜನೆಯ ಪ್ರಗತಿಯಲ್ಲಿ ಕುಂಠಿತವಾದ ಪಕ್ಷದಲ್ಲಿ ಗುತ್ತಿಗೆದಾರರೊಂದಿಗೆ ಸಭೆ ನಡೆಸಿ ಪ್ರಗತಿ ಸಾಧಿಸಲು ಆಗಿಂದಾಗ್ಯೆ ಕ್ರಮ ಕೈಗೊಳ್ಳಲಾಗುತ್ತಿದೆ.<br>• ವೀಡಿಯೋ ಕಾನ್ಫರೆನ್ಸ್ / ಸ್ಥಳ ಪರಿಶೀಲನೆ ಮೂಲಕ ಆಗಿಂದಾಗ್ಯೆ ಪ್ರಗತಿಯ ಬಗ್ಗೆ ಕ್ರಮ ಕೈಗೊಳ್ಳಲಾಗುತ್ತಿದೆ.<br>• ಗುತ್ತಿಗೆದಾರರು ಈ ಯೋಜನೆಯ ಕಾಮಗಾರಿಗಳನ್ನು ಪೂರ್ಣಗೊಳಿಸಲು ಅವಶ್ಯವಾದ ಸಂಪನ್ಮೂಲಗಳನ್ನು ಸಜ್ಜುಗೊಳಿಸುವಲ್ಲಿ ಅಗತ್ಯ ಸೂಚನೆ ನೀಡಲಾಗುತ್ತಿದೆ.<br>• ಕಾಮಗಾರಿ ವಿಳಂಬವಾಗಿರುವುದಕ್ಕೆ ರೂ.53.07 ಲಕ್ಷಗಳ ಸೂಕ್ತ ದಂಡ ವಿಧಿಸಿ ವಸೂಲಿ ಮಾಡಲಾಗಿದೆ.<br>• ಕಾಮಗಾರಿ ವೇಗವಾಗಿ ಪೂರ್ಣಗೊಳಿಸಲು ಗುತ್ತಿಗೆದಾರರಿಗೆ ಉಳಿದಿರುವ ಕಾಮಗಾರಿಗಳ ಪಟ್ಟಿಯನ್ನು ಮಾಡಿ ಎಚ್ಚರಿಕೆ ನೋಟಿಸ್ ಸಹ ಜಾರಿಗೊಳಿಸಲಾಗಿದೆ.<br>• ಗುತ್ತಿಗೆದಾರರು ದೆಹಲಿ ಮೂಲದವರಾದ್ದರಿಂದ cash flow ಅನುಕೂಲಕ್ಕೋಸ್ಕರ ಸ್ಥಳೀಯ ಬ್ಯಾಂಕ್‌ನಲ್ಲಿ ಖಾತೆ ತೆರೆದು ಶೀಘ್ರವಾಗಿ ಹಣ ಬಿಡುಗಡೆಗೆ ವ್ಯವಸ್ಥೆ ಮಾಡಲಾಗಿದೆ.<br>• ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜರುಗಿದ ರಾಯಚೂರು ಟಾಸ್ಕ್ ಫೋರ್ಸ್ ಸಭೆಯಲ್ಲಿ ಕಾಮಗಾರಿಗಳನ್ನು ಪೂರ್ಣಗೊಳಿಸಲು ಸಾಕಷ್ಟು ಬಾರಿ ಗುತ್ತಿಗೆದಾರರಿಗೆ ಎಚ್ಚರಿಕೆ ನೀಡಲಾಗಿದೆ.<br>• ಈ ಮಧ್ಯೆ ಗುತ್ತಿಗೆದಾರರು ಗುತ್ತಿಗೆ ಚಾಲ್ತಿಯಲ್ಲಿರುವಾಗಲೇ ಕಾಮಗಾರಿಯನ್ನು ಸ್ಥಗಿತಗೊಳಿಸಿ ತಕರಾರು ತೆಗೆದು ಹೆಚ್ಚುವರಿ ದರ ಮತ್ತು ದಂಡ ವಿನಾಯಿತಿ ಕೋರಿ ಇತರೆ ಬಗ್ಗೆ Arbitrator ಅನ್ನು ನೆಮಿಸಲು ಉಚ್ಚ ನ್ಯಾಯಾಲಯದಲ್ಲಿ ದಿನಾಂಕ 25/01/2018 ರಂದು ದಾವೆ ಹೂಡಿದರು.<br>• ಉಚ್ಚ ನ್ಯಾಯಾಲಯದ ಆದೇಶದಂತೆ Sole Arbitrator ಅನ್ನು ದಿನಾಂಕ 22/02/2019 ರಂದು ನೇಮಿಸಲಾಯಿತು. ಸದರಿ Arbitrator ರಲ್ಲಿ ಗುತ್ತಿಗೆದಾರರು ಅವರ ಅಹವಾಲನ್ನು ಸಲ್ಲಿಸಿದ ಕಾರಣ ನಾಗರೀಕರ ಹಾಗೂ |

| ಕ್ರ.ಸಂ. | ಪ್ರಶ್ನೆಗಳು | ಉತ್ತರ |
|---|---|---|
| | | ಕಾಮಗಾರಿಯ ಹಿತದೃಷ್ಟಿಯಿಂದ ಕೆಯುಐಡಿಎಫ್‌ಸಿ ಉನ್ನತಾಧಿಕಾರಿಗಳು ಸೌಹಾರ್ದಯುತ ಮಾತುಕತೆ ಮೂಲಕ ಒಪ್ಪಂದ ಮಾಡಲು ತೀರ್ಮಾನಿಸಲಾಯಿತು. ಇದನ್ನು ಉದ್ಯೋಗದಾತರು ಸಹ ಒಪ್ಪಿರುತ್ತಾರೆ.<br>• ಗುತ್ತಿಗೆದಾರರು ಒಂದು ವೇಳೆ ತಕರಾರನ್ನು Sole Arbitrator ರಲ್ಲಿ ಮುಂದುವರಿಸಿದರೆ ಕಾಮಗಾರಿಗಳು ಹೇಗಿದೆಯೋ ಹಾಗೆ ಸ್ಥಗಿತಗೊಂಡಲ್ಲಿ, ಕಾಮಗಾರಿಗೆ ಮಾಡಿರುವ ವೆಚ್ಚ ನಿಷ್ಪಲ ಉಂಟಾಗುವ ಸಂಭವ ಇರುತ್ತದೆ. ಮತ್ತೆ ಉಳಿದ ಕಾಮಗಾರಿಗಳನ್ನು ಪನಃ ಟೆಂಡರ್ ಕರೆದು ಬೇರೆ ಗುತ್ತಿಗೆದಾರರನ್ನು ನೇಮಿಸುವುದು ಸಹ ಕಾನೂನಿನ ತೊಡಕುಂಟಾಗುವ ಸಂಭವವಿರುತ್ತದೆ ಎಂದು ಈ ಮೆಲಿನ ನಿರ್ಣಯವನ್ನು ಕೈಗೊಳ್ಳಲಾಗಿದೆ.<br>• ಈ ಮೇಲಿನ ನಿರ್ಣಯದಂತೆ ಗುತ್ತಿಗೆದಾರರೊಂದಿಗೆ ಸಮಾಲೋಚಿಸಿ ಸೌಹಾರ್ದಯುತ ಒಪ್ಪಂದ ಕರಾರನ್ನು ದಿನಾಂಕ 12/03/2020 ರಂದು ಮಾಡಿಕೊಳ್ಳಲಾಯಿತು.<br>• ನನ್ನ ಅಧ್ಯಕ್ಷತೆಯಲ್ಲಿ (ನಗರಾಭಿವೃದ್ಧಿ ಸಚಿವರು), ರಾಯಚೂರು ನಗರಕ್ಕೆ ದಿ:11/09/2020 ರಂದು ಪ್ರವಾಸ ಕೈಗೊಂಡು, ಕಾಮಗಾರಿ ಪರಿಶೀಲನೆ ಮಾಡಿದ್ದು, ಜಿಲ್ಲಾಧಿಕಾರಿಗಳ ಸಹಯೋಗದೊಂದಿಗೆ ನಡೆದ ಸಭೆಯಲ್ಲಿ ಗುತ್ತಿಗೆದಾರರು ಮಾರ್ಚ್ 2021 ರೊಳಗೆ ತ್ವರಿತಗತಿಯಲ್ಲಿ ಪೂರ್ಣಗೊಳಿಸಿ ರಾಯಚೂರು ನಗರದ ಸಾರ್ವಜನಿಕರಿಗೆ ಕುಡಿಯುವ ನೀರು ಸರಬರಾಜು ಮಾಡುವುದಾಗಿ ಒಪ್ಪಿಕೊಂಡಿರುತ್ತಾರೆ.<br>• ಪ್ರಸ್ತುತ ಗುತ್ತಿಗೆದಾರರು ಸಮರ್ಪಕವಾಗಿ ಕೆಲಸ ನಿರ್ವಹಿಸದ ಕಾರಣ ಪೌರಾಯುಕ್ತರು ಮತ್ತು ಕಾರ್ಯಪಾಲಕ ಅಭಿಯಂತರರು ವಿವರವಾದ ಬಾಕಿ ಕಾಮಗಾರಿಗಳ ಪಟ್ಟಿ ಬಗ್ಗೆ ಪೂರ್ಣಗೊಳಿಸಲು ನೋಟಿಸನ್ನು ಗುತ್ತಿಗೆದಾರರಿಗೆ ಜಾರಿಗೊಳಿಸಿರುತ್ತಾರೆ.<br>• ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ನಗರಾಭಿವೃದ್ಧಿ ಇಲಾಖೆ ರವರ ನೇತೃತ್ವದಲ್ಲಿ ಸಭೆ ನಡಸಿ ಕಾಮಗಾರಿಯನ್ನು ತ್ವರಿತಗತಿಯಲ್ಲಿ ಪೂರ್ಣಗೊಳಿಸುವಂತೆ ಆದೇಶಿಸಿರುತ್ತಾರೆ. ಒಂದುವೇಳೆ ಗುತ್ತಿಗೆದಾರು ಸಮರ್ಪಕವಾಗಿ ಕಾಮಗಾರಿಯನ್ನು ಪೂರ್ಣಗೊಳಿಸದೇ ಇದ್ದರೆ ಕರಾರಿನ ನಿಯಮಾನುಸಾರ ಕ್ರಮ ವಹಿಸಲು ಸೂಚಿಸಿರುತ್ತಾರೆ. ಅದರಂತೆ ಪ್ರಗತಿಯನ್ನು ಆಗಿಂದಾಗ್ಗೆ ಪರಿಶೀಲಿಸಲಾಗುತ್ತಿದೆ.<br>ಕಾಮಗಾರಿಯು ಗುತ್ತಿಗೆ ಕರಾರಿನ ಪ್ರಕಾರ ಪೂರ್ಣಗೊಳಿಸಲು ದಿನಾಂಕ 27/08/2017 ರವರೆಗೆ ನಿಗಧಿಪಡಿಸಲಾಗಿತ್ತು. ಆದರೆ, 28/02/2021 ರವರೆಗೆ ಗುತ್ತಿಗೆ ವಿಸ್ತರಣೆ ನೀಡಲಾಗಿದೆ. |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| | | ಈವರೆಗೆ 8 ಬಾರಿ ಗುತ್ತಿಗೆ ವಿಸ್ತರಣೆ ಮಾಡಲಾಗಿದೆ. ಕೆಳಕಂಡ ಮುಖ್ಯ ಕಾರಣಗಳಿಂದ ಕಾಮಗಾರಿಯು ವಿಳಂಬವಾಗಿರುತ್ತದೆ.<br>• ಸಮಾಲೋಚಕರ ವಿನ್ಯಾಸವನ್ನು ಕರಾರಿನ ನಿಯಮದಂತೆ ಗುತ್ತಿಗೆದಾರರು ಪರಿಶೀಲಿಸಿ ವಿನ್ಯಾಸವನ್ನು ಅಂತಿಮಗೊಳಿಸಲು ಅವಕಾಶವಿರುತ್ತದೆ. ಅದರಂತೆ, ಗುತ್ತಿಗೆದಾರರು ವಿನ್ಯಾಸವನ್ನು ಚಾಲ್ತಿಯಲ್ಲಿರುವ ಅಮೃತ್ ಯೋಜನೆಯ ವಿನ್ಯಾಸದೊಂದಿಗೆ ಸಂಯೋಜಿಸಿ ವಿನ್ಯಾಸಿಸಿಕೊಡಲು ವಿಳಂಬಗೊಂಡಿರುತ್ತದೆ. ಇದರಿಂದ BOQ ನಲ್ಲಿರುವ ಅಂಶಗಳಲ್ಲಿ ವ್ಯತ್ಯಾಸ ಉಂಟಾಗಿ ವೇರಿಯೇಷನ್ ತಯಾರಿಸಿ ಅನುಮೋದಿಸಿವುದು ವಿಳಂಬವಾಗಿರುತ್ತದೆ.<br>• ಗುತ್ತಿಗೆದಾರರು ಯೋಜನೆಗೆ ಅವಶ್ಯವಾದ ಸಂಪನ್ಮೂಲಗಳನ್ನು ಕ್ರೂಢೀಕರಿಸುವಲ್ಲಿ ವಿಫಲರಾಗಿದ್ದರಿಂದ ಅನುಷ್ಠಾನದಲ್ಲಿ ವಿಳಂಬವಾಗಿದೆ.<br>• ಈ ಮಧ್ಯೆ ಗುತ್ತಿಗೆದಾರರು ಗುತ್ತಿಗೆ ಚಾಲ್ತಿಯಲ್ಲಿರುವಾಗಲೇ ಕಾಮಗಾರಿಯನ್ನು ಸ್ಥಗಿತಗೊಳಿಸಿ ತಕರಾರು ತೆಗೆದು ಹೆಚ್ಚುವರಿ ದರ ಮತ್ತು ದಂಡ ವಿನಾಯಿತಿ ಕೋರಿ ಇತರೆ ಬಗ್ಗೆ Arbitrator ಅನ್ನು ನೇಮಿಸಲು ಉಚ್ಚ ನ್ಯಾಯಾಲಯದಲ್ಲಿ ದಿನಾಂಕ 25/01/2018 ರಂದು ದಾವೆ ಹೂಡಿದರು.<br>• ಉಚ್ಚ ನ್ಯಾಯಾಲಯದ ಆದೇಶದಂತೆ Sole Arbitrator ಅನ್ನು ದಿನಾಂಕ 22/02/2019 ರಂದು ನೇಮಿಸಲಾಯಿತು. ಸದರಿ Arbitrator ರಲ್ಲಿ ಗುತ್ತಿಗೆದಾರರು ಅವರ ಅಹವಾಲನ್ನು ಸಲ್ಲಿಸಿದ ಕಾರಣ ನಾಗರೀಕರ ಹಾಗೂ ಕಾಮಗಾರಿಯ ಹಿತದೃಷ್ಠಿಯಿಂದ ಕೆಯುಐಡಿಎಫ್‌ಸಿ ಉನ್ನತಾಧಿಕಾರಿಗಳು ಸೌಹಾರ್ದಯುತ ಮಾತುಕತೆ ಮೂಲಕ ಒಪ್ಪಂದ ಮಾಡಲು ತೀರ್ಮಾನಿಸಲಾಯಿತು. ಇದನ್ನು ಉದ್ಯೋಗದಾತರು ಸಹ ಒಪ್ಪಿರುತ್ತಾರೆ.<br>• ಗುತ್ತಿಗೆದಾರರು ಒಂದು ವೇಳೆ ತಕರಾರನ್ನು Sole Arbitrator ರಲ್ಲೇ ಮುಂದುವರಿಸಿದರೆ ಕಾಮಗಾರಿಗಳು ಹೇಗಿದೆಯೋ ಹಾಗೆ ಸ್ಥಗಿತಗೊಂಡಲ್ಲಿ, ಕಾಮಗಾರಿಗೆ ಮಾಡಿರುವ ವೆಚ್ಚ ನಿಷ್ಫಲ ಉಂಟಾಗುವ ಸಂಭವ ಇರುತ್ತದೆ. ಮತ್ತೆ ಉಳಿದ ಕಾಮಗಾರಿಗಳನ್ನು ಪುನಃ ಟೆಂಡರ್ ಕರೆದು ಬೇರೆ ಗುತ್ತಿಗೆದಾರರನ್ನು ನೇಮಿಸುವುದು ಸಹ ಕಾನೂನಿನ ತೊಡಕುಂಟಾಗುವ ಸಂಭವವಿರುತ್ತದೆ ಎಂದು ಈ ಮೇಲಿನ ನಿರ್ಣಯವನ್ನು ಕೈಗೊಳ್ಳಲಾಗಿದೆ.<br>• ಈ ಮೇಲಿನ ನಿರ್ಣಯದಂತೆ ಗುತ್ತಿಗೆದಾರರೊಂದಿಗೆ ಸಮಾಲೋಚಿಸಿ ಸೌಹಾರ್ದಯುತ ಒಪ್ಪಂದ ಕರಾರನ್ನು ದಿನಾಂಕ 12/03/2020 ರಂದು ಮಾಡಿಕೊಳ್ಳಲಾಯಿತು. |

| ಕ್ರ.ಸಂ. | ಪ್ರಶ್ನೆಗಳು | ಉತ್ತರ |
|---|---|---|
| | | • ಮಾರ್ಚ್ 2020 ರಿಂದ ಕೋವಿಡ್-19 ಪಿಡುಗು ಬಂದ ಕಾರಣ ಲಾಕ್ ಡೌನ್ ಘೋಷಣೆಯಾದ ನಿಮ್ಮಿತ್ತ ಕೂಲಿ ಕಾರ್ಮಿಕರ ಅಭಾವದಿಂದ ಕಾಮಗಾರಿ ಕುಂಠಿತಗೊಂಡಿರುತ್ತದೆ.<br><br>ಮೆಲ್ಕಂಡ ಕಾರಣಗಳಿಂದ ಕಾಮಗಾರಿಯನ್ನು ಪೂರ್ಣಗೊಳಿಸಲು ಗುತ್ತಿಗೆ ಅವಧಿಯನ್ನು 28/02/2021 ರವರೆಗೆ ವಿಸ್ತರಿಸಲಾಗಿದೆ. ಆದರೆ, ಗುತ್ತಿಗೆದಾರರು ಆಗಸ್ಟ್ 2021 ಅಂತ್ಯದ ವರೆಗೆ ಕಾಲಾವಧಿ ವಿಸ್ತರಣೆ ಕೋರಿಕೆಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯು ಪರಿಶೀಲನೆ ಹಂತದಲ್ಲಿದೆ. |
| ಆ) | ಸರ್ಕಾರ ಕುಡಿಯುವ ನೀರಿನ ಪೂರೈಕೆಗೆ ಇಲ್ಲಿಯವರೆಗೆ ಎಷ್ಟು ಹಣ ಖರ್ಚುಮಾಡಿದೆ ಮತ್ತು ಇನ್ನೂ ಎಷ್ಟು ಕಾಮಗಾರಿ ಬಾಕಿ ಉಳಿದಿದೆ? (ವಿವರ ಒದಗಿಸುವುದು) | ಫೆಬ್ರವರಿ 2021 ರ ಅಂತ್ಯಕ್ಕೆ ರೂ.66.30 ಕೋಟಿಗಳು ವೆಚ್ಚವಾಗಿರುತ್ತದೆ.<br><br>ಇದರುವರೆಗೆ ಭೌತಿಕ ಪ್ರಗತಿ 81% ಆಗಿದ್ದು, ಬಾಕಿ ಉಳಿದಿರುವ ಕಾಮಗಾರಿಗಳ ವಿವರ ಕೆಳಗಿನಂತಿದೆ: |

| ಕ್ರ.ಸಂ | ಉಳಿದಿರುವ ಕಾಮಗಾರಿಗಳ ವಿವರ | ಪರಿಮಾಣ |
|---|---|---|
| 1 | ವಿತರಣಾ ಜಾಲದ ಉದ್ದ (ಹೆಚ್‌ಡಿಪಿಇ)<br>75 ಎಂಎಂ 30.74 ಕಿ.ಮಿ<br>90 ಎಂಎಂ 5.44 ಕಿ.ಮಿ<br>110 ಎಂಎಂ 4.18 ಕಿ.ಮಿ<br>125 ಎಂಎಂ 3.00 ಕಿ.ಮಿ<br>140 ಎಂಎಂ 3.65 ಕಿ.ಮಿ<br>160 ಎಂಎಂ 1.84 ಕಿ.ಮಿ<br>180 ಎಂಎಂ 1.29 ಕಿ.ಮಿ<br>200 ಎಂಎಂ 5.15 ಕಿ.ಮಿ<br>225 ಎಂಎಂ 2.57 ಕಿ.ಮಿ<br>250 ಎಂಎಂ 1.28 ಕಿ.ಮಿ<br>280 ಎಂಎಂ 0.95 ಕಿ.ಮಿ | 61.04 ಕಿ.ಮಿ |
| 2 | ಮನೆ ಸಂಪರ್ಕ | 4617 ಸಂಖ್ಯೆ |

ನಿರ್ಮಾಣ ಕಾಮಗಾರಿ ಪೂರ್ಣಗೊಂಡ ನಂತರ ಪ್ರಾಯೋಗಿಕವಾಗಿ ವ್ಯವಸ್ಥೆಯನ್ನು 3 ತಿಂಗಳು ಚಾಲನೆಗೊಳಿಸಿ, ಕಾರ್ಯಾಚರಣೆ ಮತ್ತು ನಿರ್ವಹಣೆ (Operation & Maintenance) ಯನ್ನು 60 ತಿಂಗಳು ನಿರ್ವಹಿಸುವ ಕಾಮಗಾರಿ ಬಾಕಿ ಇರುತ್ತದೆ.

ಕಡತ ಸಂಖ್ಯೆ: ನಅಇ 59 ಪಿ.ಆರ್.ಜೆ 2021

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು